ಒಂದಾಣೆ ಮಾಲೆ 228

ಕಾಳಿದಾಸನ

# ಮಾಲವಿಕಾಗ್ನಿಮಿತ್ರ

(ಭಾಗ ೨)



ಲೇಖಕರು:
ಶ್ರೀ ಈಳಂತೋಡಿ ರಾಮಕೃಷ್ಣ ಭಟ್ಟ,
ರಾಮಕೃಷ್ಣ ಮಿಶನ್, ಮಂಗಳೂರು.



1959

ಬೆಲೆ: ೧ ಆಣೆ.

ಒಂದಾಣೆ ಮಾಲೆ, ಮಂಗಳೂರು.

# ಟಿಪ್ಪಣಿ.

೧. "ವಿಷ್ಕಂಭ": ಹಿಂದೆ ನಡೆದುಹೋದ ಅಥವಾ ಮುಂದೆ ನಡೆಯಲಿರುವ ಕಥಾಭಾಗವನ್ನು ಕೆಲವು ಪಾತ್ರಗಳ ಸಂಭಾಷಣೆಯ ಮೂಲಕ ಸಂಕ್ಷೇಪವಾಗಿ ವಿವರಿಸುವ ನಾಟಕದ ಭಾಗಕ್ಕೆ ವಿಷ್ಕಂಭ ವೆಂದು ಹೆಸರು. ಇದು ಯಾವುದಾದರೂ ಅಂಕದ ಆದಿಯಲ್ಲಿ ಮಾತ್ರ ಬರುವುದು. ಉಚ್ಚ ಮತ್ತು ನೀಚ ಪಾತ್ರಗಳಿಂದೊಡಗೂಡಿದರೆ ಅದು ಮಿಶ್ರ ವಿಷ್ಕಂಭವೆನಿಸುವುದು.

೨. "ಉಪದೇಶದರ್ಶನ": ಶಿಷ್ಯೆಯರ ನಾಟ್ಯ ಪ್ರದರ್ಶನ.

೩. "ಕತಕ": ನೀರನ್ನು ಶುದ್ಧಗೊಳಿಸಲು ಕತಕವೆಂಬ ಬೀಜವನ್ನು ಉಪಯೋಗಿಸುತ್ತಿದ್ದರು.

೪. "ವೈತಾಳಿಕ": ಹಾಡು ಸಂಗೀತಗಳ ಮೂಲಕ ರಾಜನನ್ನು ಎಚ್ಚರಿಸುವ ಮತ್ತು ಸಮಯದ ಜ್ಞಾನವನ್ನು ಮಾಡಿ ಕೊಡುವ ಪರಿಚಾರಕನು.

೫. "ಪ್ರವೇಶಕ": ಇದು ವಿಷ್ಕಂಭದಂತಹದೇ ಒಂದು ಭಾಗ. ಆದರೆ ಇದರಲ್ಲಿ ಯಾವಾಗಲೂ ನೀಚಪಾತ್ರಗಳು ಮಾತ್ರವೇ ಬರುತ್ತವೆ ಮತ್ತು ಮೊದಲನೆಯ ಅಂಕದಲ್ಲಿ ಪ್ರವೇಶಕವಿರಬಾರದು.

೬. "ದೋಹದ": ಈ ಪದದ ನಿಜವಾದ ಅರ್ಥ 'ಗರ್ಭಿಣಿಯರ ಬಯಕೆ'. ಸಸ್ಯಗಳು ಫಲಿಸದೆ ಹೋದರೆ—ಅಶೋಕ ಮರಕ್ಕಾದರೆ ಅಲಂಕೃತಳಾದ ಸ್ತ್ರೀಯ ಪಾದಸ್ಪರ್ಶದಿಂದಲೂ, ಇತರ ವೃಕ್ಷಗಳಿಗೆ ಬೇರೆ ನಿರ್ದಿಷ್ಟ ವಿಧಗಳಿಂದಲೂ—ದೋಹದವನ್ನು ಪೂರೈಸಿದರೆ ಫಲಿಸುವುವು ಎಂದು ಅಂದಿನ ಕಾಲದ ಒಂದು ನಂಬಿಕೆ.

ಕಾಳಿದಾಸನ

# ಮಾಲವಿಕಾಗ್ನಿಮಿತ್ರ

## ಕಥಾರಚನೆ

(ಭಾಗ ೨)

### ನಾಲ್ಕನೆಯ ಅಂಕ

ಪರ್ಯುತ್ಸುಕನಾದ ರಾಜನು, ಕಾಲು ನೋವಿನಿಂದ ವೇದನೆಪಡುತ್ತಿರುವ ದೇವಿಯಲ್ಲಿರುವಳೆಂದು ತಿಳಿದು ಬರಲು ಪ್ರತೀಹಾರಿಯನ್ನು ಕಳುಹಿಸುವನು. ಅಷ್ಟರಲ್ಲಿ ಮಾಲವಿಕೆಯ ವೃತ್ತಾಂತವನ್ನು ತಿಳಿದು ಬರಲು ಕಳುಹಿಸಲ್ಪಟ್ಟ ವಿದೂಷಕನು ಬರುವನು. ಸಖಿಯ ವೃತ್ತಾಂತವೇನೆಂದು ರಾಜನು ಪ್ರಶ್ನಿಸಲು, ಬೆಕ್ಕಿನಿಂದ ಹಿಡಿಯಲ್ಪಟ್ಟ ಕೋಗಿಲೆಯದ್ದೇ ಎಂದು ವಿದೂಷಕನು ಈ ರೀತಿಯಾಗಿ ವಿವರಿಸುವನು—"ಪರಿವ್ರಾಜಿಕೆ ನನಗೆ ಹೀಗೆ ತಿಳಿಸಿದಳು—ನಿನ್ನೆ ಇರಾವತಿಯು ಕಾಲುನೋವಿನಿಂದ ವೇದನೆಪಡುತ್ತಿರುವ ದೇವಿಯನ್ನು ನೋಡಲು ಹೋದಳು. 'ವಲ್ಲಭನನ್ನು ನೋಡಿರುವೆಯೇನು?' ಎಂದು ದೇವಿಯು ಕೇಳಿದ್ದಕ್ಕೆ "ದಾಸಿಯಲ್ಲಿ ಸೇರಿರುವ ಹೃದಯವುಳ್ಳ ಅವನ ವಲ್ಲಭತ್ವವನ್ನು ತಿಳಿದೂ ತಿಳಿದೂ ಹೀಗೆ ಕೇಳುತ್ತಿರುವೆಯಲ್ಲಾ' ಎಂದಳು. ಆ ಮೇಲೆ ನಿನ್ನ ದುರ್ನೀತಿಯ ವಿಚಾರವಾಗಿ ಎಲ್ಲವನ್ನೂ ವಿವರಿಸಿದಳು. ಈಗ ಮಾಲವಿಕೆ ಬಕುಲಾವಲಿಕೆಯರ ಕಾಲುಗಳು ಸಂಕಲೆಯಿಂದ ಬಂಧಿತವಾಗಿವೆ. ಸೂರ್ಯಕಿರಣಗಳಿಗೆ ಪ್ರವೇಶವಿಲ್ಲದ ಮೃತ್ಯುಮುಖದಂತಿರುವ ನೆಲಮಾಳಿಗೆಯಲ್ಲಿ ನಾಗಕನ್ಯೆಯರಂತೆ ಪಾತಾಳವಾಸವನ್ನು ಅನುಭವಿಸುತ್ತಿದ್ದಾರೆ." ಇದನ್ನು ಕೇಳಿದ ಅರಸನು, "ಅರಳಿದ ಮಾವಿನ ಮರದ ಶಾಖೆಯ ಮೇಲೆ ಕುಳಿತಿದ್ದ ಮಧುರ ಸ್ವರವುಳ್ಳ ಕೋಗಿಲೆಯೂ ಭೃಂಗವೂ ಅಕಾಲ ವೃಷ್ಟಿಯಿಂದಾಗಿ ಕೋಟರದೊಳಗೆ ಬಿದ್ದುವು; ಮಿತ್ರ, ಈಗ ಈ ಕಷ್ಟದಿಂದ ಹೊರಬರುವ ದಾರಿ ಯಾವುದು?" ಎಂದು ವಿಲಪಿಸುವನು. "ಇರುವುದಾದರೂ

ಹೇಗೆ? ತನ್ನ ಉಂಗುರದ ಮುದ್ರೆಯನ್ನು ತೋರಿಸದೆ ಯಾರನ್ನೂ ಒಳಗೆ ಬಿಡಕೂಡದೆಂದು ಬಾಗಿಲು ಕಾಯುವ ಮಾಧವಿಕೆಗೆ ದೇವಿ ಆಜ್ಞೆಯನ್ನಿತ್ತಿರುವಳು" ಎಂದು ವಿದೂಷಕನುತ್ತರಿಸುವನು. ಸ್ವಲ್ಪ ಕಾಲ ಇಬ್ಬರೂ ಯೋಚಿಸುವರು. ವಿದೂಷಕನಿಗೆ ಒಂದು ಉಪಾಯ ಹೊಳೆಯುವುದು. ಆ ರಹಸ್ಯವನ್ನು ಅವನು ರಾಜನ ಕಿವಿಯಲ್ಲಿ ಹೇಳುವನು. ಇದನ್ನು ಕೇಳಿದ ರಾಜನಲ್ಲಿ ಆಶಾಂಕುರ ಮೊಳೆಯುವುದು. ಅಷ್ಟು ಹೊತ್ತಿಗೆ ಪ್ರತೀಹಾರಿಯೂ ಬಂದು, "ಹೊರಗೆ ತನ್ನ ಹಾಸಿಗೆಯಲ್ಲಿ ಒರಗಿಕೊಂಡು, ಕಾಲಿಗೆ ರಕ್ತಚಂದನವನ್ನು ಲೇಪಿಸಿಕೊಂಡ ದೇವಿಯು ಪರಿವ್ರಾಜಿಕೆಯಿಂದ ಕಥೆಗಳನ್ನು ಕೇಳುತ್ತಾ ಇರುವಳು" ಎಂದು ವಿಜ್ಞಾಪಿಸುವಳು. ತಮ್ಮ ಪ್ರವೇಶಕ್ಕೆ ಯೋಗ್ಯ ಸಮಯವಿದೆಂದು ತಿಳಿದು ರಾಜನು ವಿದೂಷಕನನ್ನು ಕಳುಹಿಸಿ ಹೊರಡುವನು. ಹೋಗುವಾಗ ರಾಜನ ಮಾತಿನಂತೆ ವಿದೂಷಕನು ಪ್ರತೀಹಾರಿಯಾದ ಜಯಸೇನೆಗೆ ವಿಷಯಗಳನ್ನು ರಹಸ್ಯವಾಗಿ ತಿಳುಹಿಸಿ ಹೋಗುವನು.

ರಾಜನು ದೇವಿಯಿದ್ದಲ್ಲಿಗೆ ಬರಲು ಆಕೆ ಏಳುವಳು. ಅರಸನು ಅವಳನ್ನು ತಡೆದು, "ನೋಯುತ್ತಿರುವ ನಿನ್ನ ಕಾಲನ್ನೂ ನಿನ್ನನ್ನೂ ಪೀಡಿಸಲು ಇಚ್ಛಿಸುವುದಿಲ್ಲ" ಎಂದು ಉಪಚರಿಸುವನು. ಇಷ್ಟರಲ್ಲಿ ಯಜ್ಞೋಪವೀತದಿಂದ ಬೆರಳನ್ನು ಗಟ್ಟಿಯಾಗಿ ಬಿಗಿದುಕೊಂಡು ವಿದೂಷಕನು, "ಸರ್ಪ ಕಚ್ಚಿದೆ; ರಕ್ಷಿಸಿರಿ, ರಕ್ಷಿಸಿರಿ" ಎಂದು ಬೊಬ್ಬಿಡುತ್ತಾ ಪ್ರವೇಶಿಸುವನು. 'ಎಲ್ಲಿ ತಿರುಗಾಡುತ್ತಿದ್ದೆ?' ಎಂದು ರಾಜನು ಕೇಳಿದುದಕ್ಕೆ 'ದೇವಿಗಾಗಿ ಪುಷ್ಪವನ್ನು ತರಲು ಪ್ರಮದವನಕ್ಕೆ ಹೋಗಿದ್ದೆ' ಎಂದು ವಿದೂಷಕನು ಹೇಳಲು, 'ಬ್ರಾಹ್ಮಣನ ಜೀವನಾಶಕ್ಕೆ ಕಾರಣಳಾದೆನಲ್ಲಾ' ಎಂದು ಧಾರಿಣಿ ಪರಿತಪಿಸುವಳು. "ಕಚ್ಚಲ್ಪಟ್ಟ ಬೆರಳನ್ನೀಗ ಕತ್ತರಿಸಬೇಕು. ಏಕೆಂದರೆ, ಕಚ್ಚಿದ ಭಾಗವನ್ನು ತುಂಡರಿಸುವುದು, ಸುಡುವುದು ಅಥವಾ ರಕ್ತವನ್ನು ಬಿಡುವುದು —ಇವು ಕೂಡಲೇ ಮಾಡತಕ್ಕ ಪ್ರಥಮ ಚಿಕಿತ್ಸೆಗಳು" ಎಂದು ಪರಿವ್ರಾಜಿಕೆ ಹೇಳುವಳು. ವಿಷವೈದ್ಯನಾದ ಧ್ರುವಸಿದ್ಧಿಯನ್ನು ಕರೆತರುವಂತೆ ರಾಜನು ಆಜ್ಞಾಪಿಸುವನು. ಎಲ್ಲರೂ ಎಷ್ಟು ರೀತಿಯಾಗಿ ಸಂತೈಸಿದರೂ ವಿದೂಷಕನ ಭಯವು ದೂರವಾಗದು. 'ಬಾಲ್ಯದಿಂದಲೂ ಸ್ನೇಹಿತನಾದುದರಿಂದ ಪುತ್ರಹೀನೆಯಾಗುವ ನನ್ನ ತಾಯಿಯ ಯೋಗಕ್ಷೇಮವನ್ನು ನೋಡಿಕೊ' ಎಂದು ರಾಜನಿಗೆ ಹೇಳುವನು. ಧ್ರುವಸಿದ್ಧಿಯು ವಿದೂಷಕನನ್ನು ಕಾಣಿ

ದ್ದಲ್ಲಿಗೆ ಕರೆತರಲು ಹೇಳಿದುದರಿಂದ ವಿದೂಷಕನು ಹೋಗುವನು. ನೀರಿನ ಕೊಡದಿಂದ ಮಂತ್ರಿಸುವುದಕ್ಕಾಗಿ ಸರ್ಪಮುದ್ರಿತವಾದ ಉಂಗುರವನ್ನು ಧ್ರುವಸಿದ್ಧಿಯು ಕೇಳಲು, ಧಾರಿಣಿ ತನ್ನ ಉಂಗುರವನ್ನು ತೆಗೆದೀಯುವಳು. ಸ್ವಲ್ಪ ಹೊತ್ತಿನಲ್ಲಿ ವಿದೂಷಕನು ವಿಷದಿಂದ ನಿವೃತ್ತಿಹೊಂದಿ ಸುಖವಾದ ನೆಂಬ ವಾರ್ತೆ ತಲಪುವುದು. ರಾಜನು ಏಳುತ್ತಾ, "ಬಿಸಿಲು ಬೀಳುವ ಈ ಸ್ಥಳವು ನಿನ್ನ ಕಾಲುನೋವಿಗೆ ಯೋಗ್ಯವಲ್ಲ. ಆದುದರಿಂದ ಹಾಸಿಗೆಯನ್ನು ಬೇರೆಡೆಗೆ ಕೊಂಡೊಯ್ಯುವುದೊಳ್ಳಿತು" ಎಂದು ಹೇಳಲು, ರಾಣಿಯು ಸೇವಕಿ ಯರೊಡನೆ ಹೋಗುವಳು. ತನ್ನ ಕಾರ್ಯಸಿದ್ಧಿಯ ವಿಚಾರದಲ್ಲಿ ಕಾತರ ನಾದ ರಾಜನು ಪ್ರಮದವನವನ್ನು ಪ್ರವೇಶಿಸುವನು.

ಇಷ್ಟರಲ್ಲಿ ವಿದೂಷಕನು ಬಂದು ಕಾರ್ಯವು ಸಿದ್ಧಿಸಿತೆಂಬ ಸುವಾರ್ತೆ ಯನ್ನು ತಿಳಿಸುವನು—"ನಾನು ಮಾಧವಿಕೆಗೆ ಉಂಗುರವನ್ನು ತೋರಿಸಲು ಬಂಧನದಿಂದ ಬಿಡುವ ಕಾರಣವನ್ನೂ, ಪರಿಜನರನ್ನು ಬಿಟ್ಟು ನಾನು ಬಂದ ಕಾರಣವನ್ನೂ ವಿಚಾರಿಸಿದಳು. ದೈವಚಿಂತಕರು, ರಾಜನ ನಕ್ಷತ್ರವು ಅನಿಷ್ಟಪ್ರದವಾದ ಸಂಧಿಯಲ್ಲಿರುವುದರಿಂದ ಬಂಧಿಸಲ್ಪಟ್ಟವರೆಲ್ಲರನ್ನೂ ಬಿಟ್ಟುಬಿಡಬೇಕೆಂದು ಹೇಳಿರುವರೆಂದು ಅದಕ್ಕೆ ಸಮಾಧಾನ ಹೇಳಿ ಕಾರ್ಯ ವನ್ನು ಸಾಧಿಸಿಕೊಂಡೆ" ಎಂದು ವಿವರಿಸಿ, "ಸಮುದ್ರಗೃಹದಲ್ಲಿ ಸಖಿಯೊ ಡನೆ ಮಾಲವಿಕೆಯನ್ನು ನಿಲ್ಲಿಸಿ ಬಂದಿರುವೆನು. ಆದುದರಿಂದ ಬೇಗ ಹೋಗೋಣ" ಎಂದು ರಾಜನನ್ನು ಕರೆದೊಯ್ಯುವನು. ಅಷ್ಟರಲ್ಲಿ ಇರಾ ವತಿಯ ಪರಿಚಾರಿಕೆಯಾದ ಚಂದ್ರಿಕೆಯು ಬರುತ್ತಿರುವುದನ್ನು ಕಂಡು ಇಬ್ಬರೂ ಅಡಗಿ ಕುಳಿತುಕೊಳ್ಳುವರು.

ಆ ಮೇಲೆ, ಮಾಲವಿಕೆ ಏನು ಮಾಡುತ್ತಿರುವಳೆಂದು ನೋಡಲು ಕಿಟಿ ಕಿಯ ಮೂಲಕ ನೋಡುವರು. ಮಾಲವಿಕೆ ಸಖಿಯೊಂದಿಗೆ ಕಂಡುಬರು ವಳು. ಬಕುಲಾವಲಿಕೆ ರಾಜನ ಚಿತ್ರವೊಂದನ್ನು ತೋರಿಸಿ, "ಭರ್ತೃವಿಗೆ ನಮಸ್ಕರಿಸು" ಎನ್ನುವಳು. ಮಾಲವಿಕೆ ನಮಸ್ಕರಿಸಿ, ಆ ಮೇಲೆ ಚಿತ್ರ ವೆಂದು ತಿಳಿದು ಖೇದಪಡುವಳು; "ಭರ್ತೃವನ್ನು ಸಾಕ್ಷಾತ್ತಾಗಿ ನೋಡಿದಾ ಗಲೂ ನಾನಿಷ್ಟು ತುಷ್ಟಳಾಗಿರಲಿಲ್ಲ" ಎನ್ನುವಳು. ಇದನ್ನು ಕೇಳಿದ ವಿದೂ ಷಕನು, "ಕೇಳಿದೆಯಾ? ನೀನು ನಿನ್ನ ಯೌವನದ ಗರ್ವವನ್ನು ಸುಮ್ಮನೇ ಹೇಳಿಕೊಳ್ಳುವೆ" ಎಂದು ಪರಿಹಾಸಮಾಡುವನು. ಅದಕ್ಕೆ ರಾಜನೆನ್ನು

ವನು—"ಕುತೂಹಲವಿದ್ದರೂ ಸ್ತ್ರೀಯರು ಲಜ್ಜೆಯುಳ್ಳವರು. ಪ್ರಥಮ ಸಂದರ್ಶನದಲ್ಲೇ ಪ್ರಿಯನ ರೂಪವನ್ನು ಕಣ್ತುಂಬ ನೋಡುವ ಆಸೆ ಅವರಿಗಿದ್ದರೂ, ಹಾಗೆ ನೋಡಲು ಅವರ ಕಣ್ಣುಗಳು ಸಮರ್ಥವಾಗುವುದಿಲ್ಲ." ಆ ಮೇಲೆ ಮಾಲವಿಕೆ ರಾಜನ ಬಳಿಯಲ್ಲಿ ಚಿತ್ರಿತಳಾಗಿದ್ದು ಪ್ರೇಮದಿಂದ ನೋಡಲ್ಪಡುವ ಇರಾವತಿಯನ್ನು ನೋಡಿ ಇದಾರೆಂದು ಪ್ರಶ್ನಿಸುವಳು. ವಿನೋದ ಮಾಡುವ ಇಚ್ಛೆಯಿಂದ ಬಕುಲಾವಲಿಕೆ, "ಈಕೆ ಭರ್ತೃವಿನ ವಲ್ಲಭೆ" ಎಂದು ಹೇಳುವಳು. ಮಾಲವಿಕೆ ಅಸೂಯೆಯಿಂದ ಮುಖವನ್ನು ತಿರುಗಿಸುವಳು. ಆಗ ಬಕುಲಾವಲಿಕೆ, "ಏನು ಕೋಪಿಸುವೆಯಾ?" ಎಂದು ಪ್ರಶ್ನಿಸುವಳು. "ಹಾಗಾದರೆ ಇನ್ನು ಕೋಪಿಸುವುದಿಲ್ಲ" ಎಂದು ಮಾಲವಿಕೆ ಸುಮ್ಮಗಾಗುವಳು.

ಕೂಡಲೇ ರಾಜನು ಓಡಿ ಬಂದು, "ಕುವಲಯನಯನೇ, ಚಿತ್ರವನ್ನು ನೋಡಿ ಏಕೆ ಕೋಪಿಸುವೆ? ಇದೋ, ಅನನ್ಯಸಾಧಾರಣದಾಸನಾದ ನಾನೇ ಸಾಕ್ಷಾತ್ ನಿನ್ನ ಮುಂದಿರುವೆನು" ಎನ್ನಲು, ಮಾಲವಿಕೆ ಲಜ್ಜೆಯಿಂದ ಕೈ ಜೋಡಿಸುವಳು. ಅಶೋಕದ ಚಿಗುರುಗಳನ್ನು ತಿನ್ನಲು ಬಂದ ಜಿಂಕೆಗಳನ್ನೋಡಿಸೆಂದು ವಿದೂಷಕನು ಬಕುಲಾವಲಿಕೆಗೆ ಹೇಳುವನು. "ನಾನು ಅಡಗಿ ಕುಳಿತಿರುತ್ತೇನೆ. ನೀನು ದ್ವಾರರಕ್ಷಕನಾಗು" ಎಂದು ಆಕೆ ಹೋಗುವಳು. ವಿದೂಷಕನು ಆ ಸ್ಫಟಿಕ ಸ್ಥಳದಲ್ಲಿ ವಿಶ್ರಮಿಸಿ ಅಲ್ಲೇ ನಿದ್ದೆ ಹೋಗುವನು.

ಮಾಲವಿಕೆ ಭಯದಿಂದಲೂ ಲಜ್ಜೆಯಿಂದಲೂ ನಿಲ್ಲುವಳು.

ರಾಜ: ಹೇ ಸುಂದರಿ, ಪ್ರಣಯೋನ್ಮುಖನಾದ ನನ್ನಲ್ಲಿ ಸಂಗಮದ ಭಯವನ್ನು ತೊರೆದು ಬಿಡು.

ಮಾಲವಿಕೆ: ದೇವಿಯ ಭಯದಿಂದ ನನ್ನ ಪ್ರಿಯವನ್ನೇ ಆದರೂ ಮಾಡಲು ಅಂಜುವೆನು.

ರಾ: ಹೆದರಬಾರದು.

ಮಾ: ಹೆದರದಿರುವವನ ಸಾಮರ್ಥ್ಯವು ಇರಾವತೀ ದರ್ಶನದಲ್ಲೇ ಸ್ಫುಟವಾಗಿದೆ.

ರಾ: "ಎಲೆ ಬಿಂಬೋಷ್ಠಿ, ಬಿಂಬಕನ ಕುಲದವರಿಗೆ ದಾಕ್ಷಿಣ್ಯವೆಂಬುದು ಕುಲವ್ರತ. ಎಲೆ ದೀರ್ಘಾಕ್ಷಿ, ನನ್ನ ಪ್ರಾಣಗಳೆಲ್ಲಾ ನಿನ್ನ ಆಶೆಯ

ಮೇಲಿವೆ"—ಹೀಗೆ ಹೇಳಿ ಅವಳನ್ನು ಆಲಿಂಗಿಸುವನು. ಮಾಲವಿಕೆ ತಡೆಯುವಳು. ಆಗ ರಾಜನೆನ್ನುವನು—"ರಶನಾವ್ಯಾಪಾರಲೋಲವಾದ ಬೆರಳುಗಳುಳ್ಳ ಕಂಪಿಸುವ ಹಸ್ತದಿಂದ ನನ್ನನ್ನು ತಡೆಯುತ್ತಾಳೆ. ಬಲವಾಗಿ ಆಲಿಂಗಿಸಹೋದರೆ ಹಸ್ತಗಳಿಂದ ಸ್ತನಗಳನ್ನಾವರಿಸಿಕೊಳ್ಳುತ್ತಾಳೆ. ಅಧರಾಸ್ವಾದನಕ್ಕಾಗಿ ಎತ್ತಿದ ಮುಖವನ್ನು ಬೇರೆಡೆಗೆ ತಿರುಗಿಸುತ್ತಾಳೆ. ಹೀಗಿದ್ದರೂ ಅಭಿಲಾಷೆಯನ್ನು ಪೂರೈಸುತ್ತಾಳೆ."

ಇಷ್ಟರಲ್ಲಿ ಸಮುದ್ರಗೃಹದ ಹೊರಗೆ ವಿದೂಷಕನನ್ನು ನೋಡಿದ ಚಂದ್ರಿಕೆಯಿಂದ ವಿಷಯವನ್ನರಿತ ಇರಾವತಿಯು ನಿಪುಣಿಕೆಯೊಡನೆ ಬರುವಳು. ದ್ವಾರದಲ್ಲಿ ನಿಶ್ಚಿಂತನಾಗಿ ನಿದ್ರಿಸುತ್ತಾ, ಮಾಲವಿಕೆಯನ್ನು ಕನಸಿನಲ್ಲಿ ಕರೆಯುತ್ತಿರುವ ವಿದೂಷಕನನ್ನು ನೋಡಿ ಸ್ವಲ್ಪ ವಿನೋದಮಾಡುವ ಇಚ್ಛೆ ಆ ಅಂಗನೆಯರಿಗೆ ಹುಟ್ಟುವುದು. ಹಾಗೆಯೇ ನಿಪುಣಿಕೆ ಒಂದು ದಂಡವನ್ನು ತೆಗೆದು ಅವನ ಮೈಮೇಲೆ ಎಸೆಯುವಳು. ಹಾವು ತನ್ನ ಮೈಮೇಲೆ ಬಿದ್ದಿತೆಂದು ಬೊಬ್ಬಿಡುತ್ತಾ ವಿದೂಷಕನು ಎದ್ದೇಳುವನು. ರಾಜ-ಮಾಲವಿಕೆಯರೂ ಓಡಿ ಬರುವರು. ಆ ಮೇಲೆ ದಂಡವೆಂದು ತಿಳಿದು ಸಮಾಧಾನಪಟ್ಟುಕೊಳ್ಳುವರು. ಬಕುಲಾವಲಿಕೆಯೂ ಬರುವಳು. ಥಕ್ಕನೆ ಇರಾವತಿಯೂ ಪ್ರವೇಶಿಸಿ, "ನಿಮ್ಮ ಮನೋರಥವು ಕೈಗೂಡಿತೇ?" ಎಂದು ರಾಜನನ್ನು ಪ್ರಶ್ನಿಸುವಳು. ಎಲ್ಲರೂ ದಿಗ್ಭ್ರಾಂತರಾಗುವರು. ಆ ಮೇಲೆ ಬಕುಲಾವಲಿಕೆಯನ್ನು ನೋಡಿ, "ದೈವವಶಾತ್ ನಿನ್ನ ದೌತ್ಯವಿಷಯವಾದ ಪ್ರತಿಜ್ಞೆಯು ಪೂರ್ಣವಾಯಿತಷ್ಟೆ" ಎನ್ನುವಳು.

**ಬಕುಲಾವಲಿಕೆ:** ಪ್ರಸನ್ನಳಾಗು. ಏನು, ಕಪ್ಪೆಗಳು ಕೂಗಿದರೆ ಮಳೆಯನ್ನು ಸುರಿಸಲು ದೇವನು ಮರೆಯುವನೆ?

**ವಿದೂಷಕ:** ನಿನ್ನ ದರ್ಶನಮಾತ್ರದಿಂದಲೇ ಮಹಾರಾಜನು ಹಿಂದಿನ ನಿನ್ನ ತಿರಸ್ಕಾರವನ್ನು ಮರೆತಿರಲು ಏಕೆ ಕೋಪಿಸುವೆ?

**ಇರಾವತಿ:** ಕೋಪಿಸಿದರೂ ನಾನೀಗ ಮಾಡುವುದಾದರೂ ಏನು?

**ರಾಜ:** ಎಲೆ ವರತನು, ಕಾರಣವಿಲ್ಲದೆ ಒಮ್ಮೆಯಾದರೂ ನೀನು ಕೋಪಿಸಿದುದು ಇದೆಯೇ? ಪೂರ್ಣಿಮೆಯಲ್ಲದೆ ಚಂದ್ರನಿಗೆ ಗ್ರಹಣವಾದರೂ ಎಲ್ಲಿಂದ ಬಂದೀತು?

ಇ: 'ಕಾರಣವಿಲ್ಲದೆ' ಎಂದು ಚೆನ್ನಾಗಿಯೇ ಹೇಳಿದೆ. ನಮ್ಮ ಭಾಗ್ಯವು ಬೇರೊಬ್ಬಳನ್ನು ಸೇರಿರಲು ಕೋಪಿಸಿದರೆ ಹಾಸ್ಯಾಸ್ಪದವೇ ಆದೀತು.

ರಾ: ಹಾಗೆನ್ನಬೇಡ. ನಿಜವಾಗಿಯೂ, ಇಲ್ಲಿ ಕೋಪಕ್ಕೆ ಕಾರಣವನ್ನು ನಾನು ಕಾಣೆ. ಉತ್ಸವ ದಿನಗಳಲ್ಲಿ ಅಪರಾಧಿಗಳಾದ ಪರಿಜನರನ್ನಾದರೂ ಬಂಧಿಸುವುದು ಯುಕ್ತವಲ್ಲವೆಂದು ಬಂಧವಿಮುಕ್ತಗೊಳಿಸಿರಲು ನನ್ನನ್ನು ವಂದಿಸಲು ಬಂದಿದ್ದಾರೆ.

ಇಷ್ಟರಲ್ಲಿ ನಿಪುಣಿಕೆಯು ಬಂದು ಮಾಧವಿಕೆಯಿಂದ ತಾನು ತಿಳಿದ ವಿಷಯಗಳನ್ನೆಲ್ಲಾ ಇರಾವತಿಯ ಕಿವಿಯಲ್ಲಿ ಬಿತ್ತರಿಸುವಳು. ವಿದೂಷಕನೇ ನಾಟ್ಯಾಚಾರ್ಯರ ಜಗಳದಿಂದ ತೊಡಗಿ ಈ ವರೆಗಿನ ಎಲ್ಲಾ ಉಪಾಯಗಳ ಸೂತ್ರಧಾರನೆಂದು ಆಕೆಗೆ ಈಗ ಮನವರಿಕೆಯಾಗುವುದು. ಇಷ್ಟರಲ್ಲಿ ದೈವವಶಾತ್ ಪ್ರತೀಹಾರಿಯು ಬಂದು, "ಕುಮಾರಿ ವಸುಲಕ್ಷ್ಮಿಯು ಆಡುತ್ತಿರುವಾಗ ವಾನರವೊಂದರಿಂದ ಹೆದರಿಸಲ್ಪಟ್ಟು ಪ್ರಜ್ಞೆ ತಪ್ಪಿದ್ದು, ಈಗ ದೇವಿಯ ಮಡಿಲಲ್ಲಿ ಇರುವಳು; ಇನ್ನೂ ನಡುಗುತ್ತಲೇ ಇದ್ದಾಳೆ" ಎಂದು ವಿಜ್ಞಾಪಿಸುವಳು. ಈ ಸಂದಿಗ್ಧ ಪರಿಸ್ಥಿತಿಯಿಂದ ತಪ್ಪಿಸಿಕೊಳ್ಳಲು ದಾರಿಕಾಣದೆ ನಿಂತಿದ್ದ ರಾಜನು ಅವಳನ್ನು ಸಮಾಧಾನಪಡಿಸಲು ಕೂಡಲೇ ಹೋಗುವನು. ಅದೇ ಹೊತ್ತಿಗೆ, ದೋಹದವನ್ನು ಪೂರೈಸಿ ಐದು ರಾತ್ರಿಗಳಾಗುವ ಮೊದಲೇ ಅಶೋಕವು ಹೂ ಬಿಟ್ಟಿತೆಂಬ ಸುದ್ದಿಯೂ ಸಿಗುವುದು.

## ಐದನೆಯ ಅಂಕ

ಅಗ್ನಿಮಿತ್ರನ ಸೇನಾಪತಿಯು ಯಜ್ಞತುರಗದ ರಕ್ಷಣೆಗೆ ರಾಜಪುತ್ರನಾದ ವಸುಮಿತ್ರನನ್ನು ನಿಯಮಿಸಿದ್ದನು. ಅದು ಮೊದಲ್ಗೊಂಡು ಪುತ್ರಪ್ರಾಣದ ಸುರಕ್ಷಿತತೆಯನ್ನು ಬಯಸುತ್ತಿದ್ದ ರಾಣಿಯು ಹದಿನೆಂಟು ಸುವರ್ಣಗಳ ದಕ್ಷಿಣೆಯನ್ನು ಪ್ರತಿದಿನವೂ ಯೋಗ್ಯರಿಗೆ ಕೊಡಿಸುತ್ತಿದ್ದಳು. ವಿದರ್ಭರಾಜನ ಮೇಲೆ ದಂಡೆತ್ತಿ ಹೋದ ಸೈನ್ಯವು ಜಯವನ್ನು ಸಂಪಾದಿಸಿತು. ಮಾಧವಸೇನನನ್ನು ಕೂಡ ಬಂಧವಿಮುಕ್ತಗೊಳಿಸಲಾಯಿತು. ಸೆರೆಹಿಡಿಯಲ್ಪಟ್ಟ ವಿದರ್ಭರಾಜನಿಂದ ಕಳುಹಿಸಲ್ಪಟ್ಟ ಕಲಾನಿಪುಣೆಯರಾದ ದಾಸಿಯರೊಡನೆ ರತ್ನವಾಹನಾದಿಗಳನ್ನು ಕಾಣಿಕೆಯಾಗಿ ತೆಗೆದುಕೊಂಡು ಬಂದ

ದೂತನು ಸದ್ಯದಲ್ಲಿಯೇ ರಾಜನನ್ನು ಕಾಣಲಿರುವನು. ಇಷ್ಟು ಕಥಾಂಶವು ಪ್ರವೇಶಕದಲ್ಲಿ ಅಭಿಪ್ರೇತವಾಗಿದೆ.

ಪ್ರಿಯೆಯ ವಿರಹದುಃಖವೂ ಶತ್ರುಜಯದ ಸುಖವೂ ಒಂದಾಗಿ ರಾಜನನ್ನು ಸೇರಿವೆ. "ದೇವಿಯು ಪರಿವ್ರಾಜಿಕೆ ಹೇಳಿ ಮಾಲವಿಕೆಯನ್ನು ವಿವಾಹ ವೇಷದಿಂದ ಶೃಂಗರಿಸಿರುವಳು; ನಿನ್ನ ಮನೋರಥವನ್ನು ಆಕೆ ಪೂರೈಸಲೂ ಬಹುದು" ಎಂಬ ವಿದೂಷಕನ ಮಾತು, ಅಸೂಯೆಯಿಂದ ನಿವೃತ್ತಳಾದ ಧಾರಿಣಿಯನ್ನು ನೆನೆದ ರಾಜನಲ್ಲಿ ಸ್ವಲ್ಪ ಸಮಾಧಾನವನ್ನು ಹುಟ್ಟಿಸುವುದು. ಅಷ್ಟರಲ್ಲಿ ಪ್ರತೀಹಾರಿಯು ಬಂದು, 'ಕುಸುಮಿತವಾದ ಅಶೋಕಮರದ ದರ್ಶನದಿಂದ ಕೃತಾರ್ಥಳನ್ನಾಗಿ ಮಾಡಬೇಕು' ಎಂಬ ದೇವಿಯ ಅರಿಕೆಯನ್ನರುಹುವಳು. ಹಾಗೆಯೇ ವಿದೂಷಕನೂ ರಾಜನೂ ಪ್ರಮದವನದತ್ತ ಸಾಗುವರು. ಉದ್ಯಾನದ ಶೋಭೆಯನ್ನು ನೋಡುತ್ತಾ ಬರುತ್ತಿರುವ ಅವರಿಗೆ ಧಾರಿಣಿ ಮಾಲವಿಕೆ ಪರಿವ್ರಾಜಿಕೆಯರು ಅಖಿಲ ಪರಿವಾರದೊಂದಿಗೆ ಗೋಚರಿಸುವರು. ಯಥಾವತ್ತಾಗಿ ಉಪಚಾರಗಳು ನಡೆದ ಮೇಲೆ ಎಲ್ಲರೂ ಕುಳಿತುಕೊಳ್ಳುವರು.

ಇಷ್ಟು ಹೊತ್ತಿಗೆ ವಿದರ್ಭರಾಜನಿಂದ ಕಳುಹಿಸಲ್ಪಟ್ಟ ದಾಸಿಯರು ಬರುವರು. ಮಾಲವಿಕೆಯನ್ನು ಗುರುತಿಸಿದ ಅವರು "ನಮ್ಮ ರಾಜಪುತ್ರಿ ಈಕೆ" ಎಂದುದನ್ನು ಕೇಳಿ ರಾಜನು ಉತ್ಸುಕನಾಗಲು, ಹೀಗೆ ವಿವರಿಸುವರು— "ನೀನು ವಿದರ್ಭರಾಜನನ್ನು ಸೋಲಿಸಿ ಬಂಧಮುಕ್ತಗೊಳಿಸಿದ ಮಾಧವಸೇನನ ತಂಗಿ ಮಾಲವಿಕೆ ಈಕೆ. ಮಾಧವಸೇನನು ದಾಯಾದಿಯಾದ ವಿದರ್ಭರಾಜನಿಂದ ಬಂಧಿತನಾದಾಗ ಮಂತ್ರಿಯಾದ ಸುಮತಿಯು ನಮ್ಮಂತಹ ಪರಿಜನರನ್ನು ಬಿಟ್ಟು ಈಕೆಯನ್ನು ಕರೆದುಕೊಂಡು ಹೋದನು. ಅನಂತರದ ಕಥೆಯನ್ನು ನಾವು ಅರಿಯೆವು." "ಮುಂದಿನ ಕಥೆಯನ್ನು ಮಂದಭಾಗಿನಿಯಾದ ನಾನು ಹೇಳುವೆನು" ಎಂದು ಪರಿವ್ರಾಜಿಕೆ ಆರಂಭಿಸುವಳು—"ಮಾಧವಸೇನನ ಸಚಿವನಾದ ಸುಮತಿಯೇ ನನ್ನ ಅಣ್ಣ. ಅವನು ನಿನ್ನೊಡನೆ ಸಂಬಂಧಮಾಡುವ ಇಚ್ಛೆಯಿಂದ ಇತ್ತ ಬರುವ ಪಥಿಕರ ತಂಡವೊಂದನ್ನು ಸೇರಿದನು. ಕಾಡಿನ ಮಧ್ಯದಲ್ಲಿ ತುಂಬಾ ದೂರ ನಡೆದು ಬಳಲಿದ ವ್ಯಾಪಾರಿಗಳೆಲ್ಲರೂ ವಿಶ್ರಮಿಸಲಾರಂಭಿಸಿದರು. ಅಷ್ಟರಲ್ಲಿ ಬತ್ತಳಿಕೆ ಬಾಣಗಳಿಂದಲೂ ನವಿಲು ಗರಿಗಳಿಂದಲೂ ಕೂಡಿ ಅತಿ ಭಯಂಕರರೂಪುಳ್ಳ

ಚೋರರು ಅಕಸ್ಮಾತ್ತಾಗಿ ಪ್ರತ್ಯಕ್ಷರಾದರು. ಕಳ್ಳರಿಗೂ ವ್ಯಾಪಾರಿಗಳಿಗೂ ನಡೆದ ಸ್ವಲ್ಪ ಸಮಯದ ಯುದ್ಧದಲ್ಲಿ ವ್ಯಾಪಾರಿಗಳು ಪೂರ್ಣವಾಗಿ ಸೋತು ಹೋದರು. ಸ್ವಾಮಿನಿಷ್ಠನಾಗಿದ್ದು ಈಕೆಯನ್ನು ರಕ್ಷಿಸುವ ಇಚ್ಛೆಯುಳ್ಳ ನನ್ನ ಸೋದರನು ತನ್ನ ಜೀವವನ್ನೇ ತೆತ್ತು ಋಣಮುಕ್ತನಾದನು. ನನಗೆ ಪ್ರಜ್ಞೆ ಬಂದಾಗ ಈಕೆ ಕಾಣಸಿಗಲಿಲ್ಲ. ಸೋದರನ ಅಗ್ನಿಸಂಸ್ಕಾರವನ್ನು ಮುಗಿಸಿ ಹೊಸತಾದ ವೈಧವ್ಯದುಃಖದಿಂದ ತಪ್ತಳಾದ ನಾನು ಈ ಕಾಷಾಯ ವನ್ನು ಧರಿಸಿದೆ. ಈಕೆ ಕಳ್ಳರಿಂದ ವೀರಸೇನನಿಗೆ ದೊರೆತಳು. ವೀರಸೇನ ನಿಂದ ದೇವಿಯನ್ನೇ ಸೇರಿದಳು." ಈ ಕಥೆಯನ್ನು ಕೇಳಿದ ರಾಜನೂ ರಾಣಿಯೂ, ರೇಶ್ಮೆಬಟ್ಟೆಯನ್ನು ಸ್ನಾನವಸ್ತ್ರವಾಗಿ ಉಪಯೋಗಿಸಿದಂತೆಯೂ ಚಂದನವನ್ನು ಪಾದುಕೆಗಾಗಿ ಉಪಯೋಗಿಸಿದಂತೆಯೂ ರಾಜಪುತ್ರಿಯಾದ ಮಾಲವಿಕೆಯನ್ನು ದಾಸಿಯಾಗಿ ಇಟ್ಟುಕೊಂಡುದಕ್ಕಾಗಿ ಪಶ್ಚಾತ್ತಾಪಪಡು ವರು. ಧಾರಿಣಿ ಪರಿವ್ರಾಜಿಕೆಯನ್ನು ಕುರಿತು, ಈ ವಿಷಯವನ್ನು ತಿಳಿ ದಿದ್ದೂ ಆಕೆ ಬಚ್ಚಿಟ್ಟುದು ಸಮಂಜಸವಾಗಲಿಲ್ಲವೆಂದು ಆಕ್ಷೇಪಿಸುವಳು. ಅದಕ್ಕೆ ಪರಿವ್ರಾಜಿಕೆ, "ಹಾಗಲ್ಲ; ಸಂವತ್ಸರ ಪರ್ಯಂತ ಈಕೆ ದಾಸಿಯಾಗಿ ಆ ಮೇಲೆ ಸದೃಶನಾದ ಪತಿಯನ್ನು ಹೊಂದುವಳೆಂದು ಈಕೆಯ ತಂದೆ ಜೀವಿಸಿರುವಾಗ ಸಾಧುವೊಬ್ಬನು ನನ್ನ ಸಮಕ್ಷಮದಲ್ಲಿ ಹೇಳಿದ್ದನು. ಅವಳ ಅನಿವಾರ್ಯವಾದ ವಿಧಿಯು ದೇವಿಯ ಪರಿಚರ್ಯೆಯಲ್ಲಿ ಪರಿಣಮಿಸಿತೆಂದು ತಿಳಿದ ನಾನು ಸರಿಯಾಗಿಯೇ ನಡೆದುಕೊಂಡಿರುವೆನೆಂದು ಬಗೆಯುತ್ತೇನೆ" ಎಂದು ಸಮಾಧಾನಪಡಿಸುವಳು.

ಅಷ್ಟರಲ್ಲಿ ವಿದರ್ಭದೇಶದ ಕುರಿತು ವಹಿಸಬೇಕಾದ ಧೋರಣೆಯ ವಿಷಯದಲ್ಲಿ ರಾಜನ ಅಭಿಪ್ರಾಯವನ್ನು ತಿಳಿಯಲು ಮಂತ್ರಿಯಿಂದ ಕಳುಹಿಸಲ್ಪಟ್ಟ ಕಂಚುಕಿಯು ಬರುವನು. ಸಹೋದರರಾದ ಯಜ್ಞಸೇನ-ಮಾಧವಸೇನರಿಗೆ ವರದಾನದಿಯ ಉತ್ತರ ದಕ್ಷಿಣ ಭಾಗಗಳನ್ನು ಒಪ್ಪಿಸಿ ಕೊಡುವಂತೆ ರಾಜನು ಹೇಳುವನು.

ಈಗ ಸೇನಾಪತಿಯು ಕಳುಹಿಸಿದ ಕಾಣಿಕೆ ಸಮೇತವಾದ ಪತ್ರವು ಬರುವುದು. ರಾಜನು ಅದನ್ನೋದುವನು—"ಸ್ವಸ್ತಿ. ಯಜ್ಞಶಾಲೆಯಿಂದ ಸೇನಾಪತಿಯಾದ ಪುಷ್ಪಮಿತ್ರನು ಪ್ರಾಣಪ್ರಿಯನೂ ಆಯುಷ್ಮಂತನೂ ಆದ ಅಗ್ನಿಮಿತ್ರನನ್ನು ಆಲಿಂಗಿಸಿ ತಿಳಿಸುತ್ತಾನೆ—ಯಜ್ಞದೀಕ್ಷಿತನಾದ ನಾನು

ರಾಜಕುಮಾರನಾದ ವಸುಮಿತ್ರನನ್ನು ರಕ್ಷಕನನ್ನಾಗಿ ಮಾಡಿ ಕಳುಹಿಸಿದ ಕುದುರೆಯನ್ನು ಸಿಂಧೂನದಿಯ ದಕ್ಷಿಣ ದಡದಲ್ಲಿ ಯವನರ ತಂಡವೊಂದು ತಡೆಯಿತು. ಆ ಮೇಲೆ ಎರಡೂ ಸೇನೆಗಳ ಮಧ್ಯೆ ಭಯಂಕರ ಯುದ್ಧ ವಾಯಿತು. ಬಿಲ್ಲಾಳನಾದ ವಸುಮಿತ್ರನು ಶತ್ರುಗಳನ್ನು ಸೋಲಿಸಿ, ಅಪಹರಿಸಲ್ಪಡುತ್ತಿರುವ ನನ್ನ ಕುದುರೆಯನ್ನು ಹಿಂತಿರುಗಿಸಿದನು. ಈಗ ಮಾಡುವ ಯಜ್ಞಕ್ಕೆ ನೀನು ಪ್ರಸನ್ನವದನನಾಗಿ ಕುಟುಂಬಸಮೇತನಾಗಿ ಚಿತ್ತೈಸಬೇಕು." ಪತ್ರವನ್ನೋದಿದ ರಾಜನು ಯಜ್ಞಸೇನನ ಶ್ಯಾಲ ನನ್ನುಳಿದು ಇತರ ಎಲ್ಲಾ ಕೈದಿಗಳನ್ನೂ ಬಿಡುಗಡೆಮಾಡುವಂತೆ ಅಪ್ಪಣೆ ಕೊಡುವನು.

ಧಾರಿಣಿ ಪ್ರತೀಹಾರಿಯನ್ನು ಕರೆದು, "ಮಾಲವಿಕೆಗೆ ಅಶೋಕಮರದ ದೋಹದವನ್ನು ಪೂರೈಸಲು ಆಜ್ಞೆಯಿತ್ತಾಗ, ಐದು ರಾತ್ರಿಗಳ ಮೊದಲು ಕುಸುಮಿತವಾದರೆ ಅಭಿಲಾಷೆಯನ್ನು ಪೂರೈಸುವ ವರವನ್ನು ಕೊಡುವೆ ನೆಂದು ಮಾತುಕೊಟ್ಟಿದ್ದನ್ನೂ ಅವಳ ವಂಶವೃತ್ತಾಂತವನ್ನೂ ಇರಾವತಿಗೆ ಹೇಳಿ, ಈ ಕಾರ್ಯದಲ್ಲಿ ಅಡ್ಡಿಮಾಡಬಾರದೆಂದು ತಿಳಿಸು" ಎಂದು ಕಳುಹಿ ಸುವಳು. ಪ್ರತೀಹಾರಿಯು ಹಾಗೆಯೇ ಮಾಡಿ, ಪುನಃ ಬಂದು ಇರಾ ವತಿಯ ಸಮ್ಮತಿಯನ್ನು ತಿಳಿಸುವಳು. ಆ ಮೇಲೆ ಧಾರಿಣಿ ಪರಿವ್ರಾಜಿಕೆ ಯನ್ನು ಕುರಿತು, "ನಿನ್ನ ಅಪ್ಪಣೆ ಮೇರೆಗೆ, ಸುಮತಿಯ ಇಚ್ಛಾನುಸಾರ ವಾಗಿ ಈಕೆಯನ್ನು ಆರ್ಯಪುತ್ರನಿಗೆ ಕೊಡಬಯಸುತ್ತೇನೆ" ಎಂದು ಮಾಲ ವಿಕೆಯನ್ನು ರಾಜನಿಗೊಪ್ಪಿಸುವಳು. ಇದನ್ನು ನೋಡುತ್ತಿರುವ ಪರಿವ್ರಾ ಜಿಕೆ, "ಪ್ರತಿಪಕ್ಷದಿಂದಾದರೂ ಭರ್ತೃವತ್ಸಲೆಯರಾದ ಸ್ತ್ರೀಯರು ಪತಿ ಯನ್ನು ಸೇವಿಸುತ್ತಾರೆ—ನದಿಗಳು ತಮ್ಮ ಜೊತೆಗೆ ಸಾವಿರಾರು ತೊರೆಗಳನ್ನು ಕರೆದುಕೊಂಡು ಸಾಗರಕ್ಕೆ ಸೇರಿಸುವಂತೆ'' ಎಂದು ಧಾರಿಣಿಯ ನೀತಿಯನ್ನು ಸಮರ್ಥಿಸುವಳು. ಇರಾವತಿಯೂ ಕೂಡ, ತಾನು ಅಪರಾಧವನ್ನೇ ಮಾಡಿದರೂ ರಾಜನಿಗೆ ಅದರಿಂದ ಉಪಕಾರವೇ ಆಯಿತೆಂದೂ ಈಗ ರಾಜನು ತನ್ನ ಮೇಲೆ ಪ್ರಸನ್ನನಾಗಬೇಕೆಂದೂ ನಿಪುಣಿಕಾಮುಖದಿಂದ ತಿಳಿಸುವಳು. ಇಲ್ಲಿಗೆ, ಪ್ರಜೆಗಳ ಹಿತವನ್ನು ಬಯಸುವ ಭರತವಾಕ್ಯ ದೊಡನೆ "ಮಾಲವಿಕಾಗ್ನಿಮಿತ್ರ"ವು ಅಂತ್ಯವಾಗುವುದು.

# ಕಾಳಿದಾಸ—"ಮಾಲವಿಕಾಗ್ನಿಮಿತ್ರ"ದಲ್ಲಿ

## ವ್ಯಕ್ತಿತ್ವ

ಕಾಳಿದಾಸನು ಶಿವಭಕ್ತನು; ದುರಭಿಮಾನವಿಲ್ಲದ ಕರ್ಮಯೋಗಿ; ಪ್ರಕೃತಿಪ್ರೇಮಿ. ನಾಂದೀ ಶ್ಲೋಕದಲ್ಲಿ ಆತನು ಅತ್ಯಂತ ಸುಂದರ ಶೈಲಿಯಲ್ಲಿ ಸುಮನೋಜ್ಞವಾಗಿ ಶಿವಸ್ತುತಿಯನ್ನು ಮಾಡಿರುತ್ತಾನೆ. ಮೂರು ಲೋಕಗಳ ಒಡೆಯನಾಗಿದ್ದು ಭಕ್ತರ ಅಭೀಷ್ಟವನ್ನು ಪೂರೈಸುವ ಶಿವನು ಸ್ವತಃ ಚರ್ಮವನ್ನುಟ್ಟುಕೊಂಡಿದ್ದಾನೆ; ಕಾಂತಾಸಮ್ಮಿಶ್ರವಾದ ದೇಹವುಳ್ಳವನಾದರೂ ಪರಮಯೋಗಿಗಳ ಗುರುವಾಗಿದ್ದಾನೆ; ಎಂಟು ರೂಪಗಳಿಂದ ಜಗತ್ತನ್ನೇ ಆಧರಿಸಿದ್ದರೂ ಹೆಮ್ಮೆಯಿಲ್ಲ ಅವನಿಗೆ. ಅಂತಹ ಶಿವನು ನಿಮ್ಮ ತಾಮಸೀವೃತ್ತಿಯನ್ನು ಕಳೆಯಲಿ ಎನ್ನುತ್ತಾನೆ ಕಾಳಿದಾಸ. ಕರ್ಮಯೋಗವನ್ನು ಬೋಧಿಸುವಂತೆ ಚಿತ್ರಿಸಲಾಗಿದೆ ಶಿವನನ್ನು. ಎಷ್ಟೇ ಐಶ್ವರ್ಯ ಸಂಪತ್ತುಗಳಿದ್ದರೂ ಅವುಗಳಿಂದಾತನು ವಿರಕ್ತನಾಗಿದ್ದಾನೆ. ಸಹಜವಾದ ಕವಿಪ್ರಶಂಸೆಯಲ್ಲಿ ಆತನೇನೂ ತನ್ನ ಹೆಗ್ಗಳಿಕೆಯನ್ನು ಹೆಚ್ಚಾಗಿ ಹೇಳಿಕೊಂಡಿಲ್ಲ. "ಶ್ರೀ ಕಾಳಿದಾಸಗ್ರಥಿತವಸ್ತು ಮಾಲವಿಕಾಗ್ನಿಮಿತ್ರಂ ನಾಮ ನಾಟಕಂ........" ಎಂದು ಬಹಳ ಚುಟುಕಾಗಿ ಮುಗಿಸಿದ್ದಾನೆ. ತನ್ನ ಇಷ್ಟದೇವತೆಯಾದ ಶಿವನಂತೆ ಅವನೂ ಕೂಡ ಅಭಿಮಾನಶೂನ್ಯನಾಗಿದ್ದಾನೆ.

ಸನಾತನ ಆರ್ಯರಂತೆ ಪ್ರಕೃತಿಗೆ ಮನುಷ್ಯತ್ವವನ್ನು ಕೊಟ್ಟವನವನು. ಪೀಡಿತನಾದ ಅಗ್ನಿಮಿತ್ರನನ್ನು ವಸಂತನು ಸಂತೈಸಿದನೆಂದು ಅವನೇ ಹೇಳುತ್ತಾನೆ. ಹಾಗೆಯೇ ಸ್ತ್ರೀಸೌಂದರ್ಯಕ್ಕಿಂತ ಹೆಚ್ಚಿನ ಸೌಂದರ್ಯವನ್ನು ಆತನು ಪ್ರಕೃತಿಯಲ್ಲಿ ಕಂಡಿದ್ದಾನೆ. ಸುಂದರ ಶೈಲಿಯಲ್ಲಿ ತನ್ನ ಶಬ್ದಪಾಂಡಿತ್ಯದ ಪ್ರತೀಕವೋ ಎಂಬ ರೀತಿಯಲ್ಲಿ ವಸಂತಸೌಂದರ್ಯವು ಸ್ತ್ರೀಸೌಂದರ್ಯವನ್ನು ಮೀರಿಸಿತು ಎಂದವನೇ ಹೇಳುತ್ತಾನೆ.

## ಶಾಸ್ತ್ರಕವಿಯಾಗಿ

ಸಕಲಶಾಸ್ತ್ರಗಳೂ ಕಾಳಿದಾಸನ ನಾಲಗೆಯ ತುದಿಯಲ್ಲಿ ನೆಲೆಸಿದ್ದುವು. ಮಾಲವಿಕಾಗ್ನಿಮಿತ್ರದಲ್ಲಿ ಜ್ಯೋತಿಷ, ವೈದ್ಯ, ನಾಟ್ಯ ಮೊದಲಾದುವುಗಳಲ್ಲಿ ತನ್ನ ಪ್ರಾವೀಣ್ಯವನ್ನೂ, ಅಗಾಧ ವ್ಯವಹಾರಜ್ಞಾನವನ್ನೂ ತೋರಿಸಿಕೊಟ್ಟಿದ್ದಾನೆ.

ಮಂಗಳಗ್ರಹವು ಸೂರ್ಯನ ಸುತ್ತು ಚಲಿಸುತ್ತಿರುವಾಗ ಪೂರ್ಣ ಸುತ್ತು ಆಗುವ ಮೊದಲೇ ದಾಟಿದ ರಾಶಿಗೆ ಪುನಃ ಬರುವುದಿದೆಯೆಂದು ಕಾಳಿದಾಸನ ಉಪಮೆಯೊಂದು ಹೇಳುತ್ತದೆ. ಕ್ಲಿಪ್ತಕಾಲದಲ್ಲಿ ಆಹಾರ ಸೇವನೆ ಮಾಡದಿದ್ದರೆ ಆರೋಗ್ಯಕ್ಕೆ ಹಾನಿಯೆಂದು ಕಾಳಿದಾಸನು ಹೇಳುತ್ತಾನೆ. ವಿಷದ ಹಾವು ಕಚ್ಚಿದಾಗ ಪ್ರಥಮಚಿಕಿತ್ಸೆಯಾಗಿ ದೃಢವಾಗಿ ಗಂಟುಬಿಗಿಯಬೇಕೆಂದು ನಾಲ್ಕನೆಯ ಅಂಕದಲ್ಲಿ "ಯಜ್ಞೋಪವೀತದಿಂದ ಬೆರಳನ್ನು ದೃಢವಾಗಿ ಕಟ್ಟಿಕೊಂಡ ವಿದೂಷಕನು ಬರುತ್ತಾನೆ." ಚಿಕಿತ್ಸೆ ಮಾಡುವುದಿದ್ದರೆ, ಕಚ್ಚಿದ ಭಾಗವನ್ನು ಕತ್ತರಿಸಿಬಿಡಬೇಕು, ಸುಟ್ಟುಬಿಡಬೇಕು ಅಥವಾ ಕಚ್ಚಿದ ಸ್ಥಾನದಿಂದ ರಕ್ತಸ್ರಾವವಾಗಲು ಬಿಡಬೇಕು ಎಂದು ಇನ್ನೊಂದೆಡೆ ಉಕ್ತವಾಗಿದೆ. ನಾಟ್ಯದಲ್ಲಿಯೂ ಸಂಗೀತದಲ್ಲಿಯೂ ಕಾಳಿದಾಸನಿಗೆ ಅಗಾಧ ಪಾಂಡಿತ್ಯವಿತ್ತು.

## ಮಹಾಕವಿಯಾಗಿ

ಕಾಳಿದಾಸನು ಅಧ್ಯಾಪಕರ ವಿಚಾರವಾಗಿ ತುಂಬಾ ಗೌರವದ ಮಾತುಗಳನ್ನಾಡಿದ್ದಾನೆ. ಶಿಷ್ಯನಿಂದ ಪರಾಜಿತನಾದಾಗ ಮಾತ್ರ ಗುರುವಿಗೆ ತೃಪ್ತಿಯಾಗುವುದು ಎಂದವನು ನಂಬಿದ್ದನು. ಹಾಗಾದರೆ ಗುರುವು ಯೋಗ್ಯನಾಗಿದ್ದು ಶಿಷ್ಯನು ಅಸಫಲನಾದರೆ ಅದು ಗುರುವಿನ ದೋಷವೇ ಎಂಬ ಪ್ರಶ್ನೆಗೆ ಅಯೋಗ್ಯ ಶಿಷ್ಯನನ್ನು ಸ್ವೀಕರಿಸುವುದೂ ಬುದ್ಧಿಲಾಘವವನ್ನು ಪ್ರದರ್ಶಿಸುತ್ತದೆ ಎಂದು ಒಂದನೆಯ ಅಂಕದಲ್ಲಿ ಉಕ್ತವಾಗಿದೆ. ಕೆಲವರು ತುಂಬಾ ಪಾಂಡಿತ್ಯವನ್ನು ಗಳಿಸಿರಬಹುದು. ಇನ್ನು ಕೆಲವರು ತಿಳಿದುದನ್ನು ಹೇಳಿಕೊಡುವುದರಲ್ಲಿ ಸಮರ್ಥರಾಗಿರಬಹುದು. ಆದರೆ, ಎರಡರಲ್ಲೂ ನಿಪುಣನಾದವನೇ ಉತ್ತಮ ಶಿಕ್ಷಕನೆಂದು ಕಾಳಿದಾಸನ ಮತ. ಸಮಯ ಬಂದಾಗ ವಿವಾದಮಾಡುವುದಕ್ಕೆ ಹೆದರಿಕೊಂಡು ಪರರ ನಿಂದೆಯನ್ನು ಸಹಿಸುವವನನ್ನು ಮತ್ತು ಯಾವನ ಜ್ಞಾನವು ಹೊಟ್ಟೆಹೊರೆಯುವುದಕ್ಕಾಗಿ ಮಾತ್ರವೋ ಅವನನ್ನು ವ್ಯಾಪಾರಿ ಎಂದು ಹೀಸ್ಯೈಸುತ್ತಾನೆ ಕಾಳಿದಾಸ.

ಪ್ರೇಮದ ಬಗೆಗೆ ಕಾಳಿದಾಸನ ಮತವು ದಿವ್ಯವಾದುದು. ಪ್ರೇಮವನ್ನು ಪ್ರೇಮದಿಂದಲೇ ಪರೀಕ್ಷಿಸಬೇಕೆಂದು ಅವನೆನ್ನುವನು—"ಅನುರಾಗೋಽನುರಾಗೇಣ ..ರೀಕ್ಷಿತವ್ಯಃ" (ಮೂರನೆಯ ಅಂಕದಲ್ಲಿ) ಹೆಣು

ಗಂಡುಗಳಲ್ಲೊಬ್ಬರಿಗೆ ಅತೀವ ಅಭಿಲಾಷೆಯಿದ್ದು ಇನ್ನೊಬ್ಬರಿಗೆ ಇಲ್ಲದೇ ಹೋದರೆ, ಅವರು ಯಶಸ್ವಿಗಳಾಗಿ ಸಮಾಗಮವನ್ನು ಹೊಂದಿದರೂ ಕಾಳಿದಾಸ ಮೆಚ್ಚಲಾರ. ಅದಕ್ಕಿಂತ ಇಬ್ಬರಿಗೂ ತುಂಬಾ ಅಭಿಲಾಷೆ ಯಿದ್ದು ಪರಸ್ಪರ ಸಮಾಗಮ ಹೊಂದದೆ ಶರೀರನಾಶವಾದರೂ ಅದು ಶ್ರೇಷ್ಠ ತರವಾದುದೆಂದು ಕಾಳಿದಾಸನು ದನಿಯೆತ್ತಿ ಸಾರುತ್ತಾನೆ—

ಅನಾತುರೋತ್ಕಂಠಿತಯೋಃ ಪ್ರಸಿದ್ಧ್ಯತಾ ಸಮಾಗಮೇನಾಪಿ
ರತಿರ್ನಮಾಂ ಪ್ರತಿ ।
ಪರಸ್ಪರ ಪ್ರಾಪ್ತಿನಿರಾಶಯೋರ್ವರಂ ಶರೀರನಾಶೋಽಪಿ
ಸಮಾನುರಾಗಯೋಃ ॥
(III—15)

ಹಳತೆಲ್ಲಾ ಒಳ್ಳೆಯದೆಂದುಕೊಂಡು ಹೊಸತೆಲ್ಲಾ ಹಾಳೆಂದು ದೂರು ವುದು ಸರಿಯಲ್ಲ. ಉತ್ತಮವಾದುದನ್ನು ವಿಮರ್ಶೆಯಿಂದ ನಿರ್ಧರಿಸ ಬೇಕೆನ್ನುತ್ತಾನೆ:

ಪುರಾಣಮಿತ್ಯೇವ ನ ಸಾಧು ಸರ್ವಂ
ನ ಚಾಪಿ ಕಾವ್ಯಂ ನ ವಮಿತ್ಯವದ್ಯಮ್ ।
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ
ಮೂಢಃ ಪರಪ್ರತ್ಯಯನೇಯ ಬುದ್ಧಿಃ ॥
(I—2)

ಸರ್ವಜ್ಞನಾದರೂ ಒಬ್ಬನ ವೈಯಕ್ತಿಕ ನಿರ್ಣಯವು ದೋಷಕರ ವಾದುದು — "ಸರ್ವಜ್ಞಸ್ಯಾಪ್ಯೇಕಾಕಿನೋ ನಿರ್ಣಯಾಭ್ಯುಪಗಮೋ ದೋಷಾಯ" ಎಂದು ಒಂದನೆಯ ಅಂಕದಲ್ಲಿ ಹೇಳಿದೆ.

ಇಂತಹ ಪ್ರತಿಯೊಂದು ಮಾತೂ ಕಾಳಿದಾಸನ ವ್ಯವಹಾರಜ್ಞಾನದ ಮತ್ತು ಅಗಾಧ ಪಾಂಡಿತ್ಯದ ಸಾಕ್ಷಿಯಾಗಿ ಇಂದಿಗೂ ನಿಂತಿದೆ. ಸಾಹಿತ್ಯ ದಿಗಂತದಲ್ಲಿ ಕಾಳಿದಾಸ ಅಚ್ಚಳಿಯದ ದಿವ್ಯ ಪ್ರತಿಭಾನ್ವಿತ ಉಜ್ವಲ ತಾರೆ ಯಾಗಿ ಆಚಂದ್ರಾರ್ಕವಾಗಿ ಉಳಿಯುತ್ತಾನೆ. (ಸ್ಥಳಸಂಕೋಚದಿಂದ ಇಲ್ಲಿ ವಿಸ್ತರಿಸಿ ಬರೆದಿಲ್ಲ.)



Edited, Printed & Published by K. V. Shenoy
at The Prabhat Printers Ltd., Mangalore.